# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 847
ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 20.12.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಹಲವು ಸರ್ಕಾರಿ ಶಾಲೆಗಳಲ್ಲಿ ಹೆಣ್ಣು ಮಕ್ಕಳಿಗೆ ಶುದ್ಧ ಶೌಚಾಲಯಗಳಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ. |
| ಆ) | ಹಾಗಿದ್ದಲ್ಲಿ ರಾಜ್ಯದ ಸರ್ಕಾರಿ ಶಾಲೆಗಳಲ್ಲಿ ಶುದ್ಧ ಶೌಚಾಲಯಗಳು ಸೇರಿದಂತೆ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | • 2021–22ನೇ ಸಾಲಿನಲ್ಲಿ ರಾಜ್ಯ ವಲಯ ಹಾಗೂ ನರೇಗಾ ಅನುದಾನ ಒಗ್ಗೂಡಿಸುವಿಕೆಯ ಮೂಲಕ ಶೌಚಾಲಯ ನಿರ್ಮಾಣ ಹಾಗೂ ದುರಸ್ತಿಗೆ 3500.00ಲಕ್ಷಗಳ ಅನುದಾನ ಒದಗಿಸಲಾಗಿರುತ್ತದೆ.<br>• 2021–22ನೇ ಸಾಲಿನ ಅಮೃತ ಶಾಲಾ ಸೌಲಭ್ಯ ಯೋಜನೆಯಡಿ ರಾಜ್ಯಾದಾದ್ಯಂತ 750 ಸರ್ಕಾರಿ ಶಾಲೆಗಳ ಸಮಗ್ರ ಅಭಿವೃದ್ಧಿಗಾಗಿ ತಲಾ. 10.00 ಲಕ್ಷಗಳಂತೆ ರೂ.7500.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದೆ.<br>• 2021–22ನೇ ಸಾಲಿನ ರಾಜ್ಯ ಸರ್ಕಾರದ ಬಂಡವಾಳ ವೆಚ್ಚ ಯೋಜನೆಯಡಿ ವಿವಿಧ ವಿಧಾನ ಸಭಾ ಕ್ಷೇತ್ರದ ಸರ್ಕಾರಿ ಶಾಲಾ ಕಟ್ಟಡಗಳ ತುರ್ತು ದುರಸ್ಥಿಗೆ ರೂ.6.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ. ಸದರಿ ಅನುದಾನವನ್ನು ಗರಿಷ್ಠ ಶಾಲೆಗಳಲ್ಲಿ ದುರಸ್ಥಿ ಕಾರ್ಯ ವಿಸ್ತರಿಸಲು ಸ್ಥಳೀಯವಾಗಿ ಜಾರಿಯಲ್ಲಿರುವ ವಿವಿಧ ಅಭಿವೃದ್ಧಿ ಯೋಜನೆಗಳ ಅನುದಾನವನ್ನು ಒಗ್ಗೂಡಿಸುವಿಕೆ (convergence) ಮೂಲಕ ಅನುಷ್ಠಾನಕ್ಕಾಗಿ ಸಂಬಂಧಿಸಿದ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕಾರ್ಯಾನುಷ್ಠಾನ ಸಮಿತಿಯನ್ನು ರಚಿಸಿ ಶೀಘ್ರವಾಗಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.<br>• ಶಾಲಾ ಕಟ್ಟಡಗಳ ದುರಸ್ಥಿಗಾಗಿ ರಾಜ್ಯ/ಜಿಲ್ಲಾ ವಿಪತ್ತು ನಿರ್ವಹಣಾ ನಿಧಿಯಡಿ ಹಾಗೂ ಇತರೆ ಲಭ್ಯವಿರುವ ಅನುದಾನ (ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆ ಡಿ.ಎಂ.ಎಫ್ ಯೋಜನೆ ಮತ್ತು ಜಿಲ್ಲಾ ಪಂಚಾಯತ್ ಸೇರ್ಪಡೆ ಹಾಗೂ ಮಾರ್ಪಾಡು ಯೋಜನೆಗಳಡಿ) ಬಿಡುಗಡೆ ಮಾಡಲು ಆಯಾ |

ಜಿಲ್ಲಾಧಿಕಾರಿಗಳಿಗೆ ಮತ್ತು ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸಿ ಅನುದಾನವನ್ನು ಬಿಡುಗಡೆ ಮಾಡಿಸಿಕೊಂಡು ಶಾಲಾ ಕಟ್ಟಡಗಳ ದುರಸ್ಥಿಯನ್ನು ಶೀಘ್ರವಾಗಿ ಕೈಗೊಳ್ಳುವಂತೆ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ಇವರ ಸುತ್ತೋಲೆ ದಿನಾಂಕ:19.11.2021ರಲ್ಲಿ ರಾಜ್ಯದ ಎಲ್ಲಾ ಉಪನಿರ್ದೇಶಕರು (ಆಡಳಿತ) ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ನಿರ್ದೇಶಿಸಲಾಗಿದೆ.

- ಮಹಾತ್ಮಾ ಗಾಂಧಿ ನರೇಗಾ ಯೋಜನೆ ಅಡಿಯಲ್ಲಿ ಶಾಲೆಗಳಿಗೆ ಅಗತ್ಯವಿರುವ ಮೂಲಭೂತ ಸೌಕರ್ಯಗಳನ್ನು ಒದಗಿಸಲು 14 ಮತ್ತು 15ನೇ ಹಣಕಾಸು ಆಯೋಗದಲ್ಲಿ ಸಂಬಂಧಿಸಿದ ಗ್ರಾಮ ಪಂಚಾಯತಿಗಳಿಗೆ ಅವಕಾಶ ಕಲ್ಪಿಸಲಾಗಿದೆ. ಈ ಹಿನ್ನಲೆಯಲ್ಲಿ ಕ್ರಮವಹಿಸಿ ಅನುದಾನ ಹಂಚಿಕೆ ಮಾಡಲು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ದಿನಾಂಕ:09.12.2021 ರಂದು ಪತ್ರ ಬರೆಯಲಾಗಿದೆ.
- 2021-22ನೇ ಸಾಲಿನಲ್ಲಿ ಕೊಠಡಿಗಳ ದುರಸ್ತಿ, ನೂತನ ಶಾಲಾ ಕಟ್ಟಡಗಳ ನಿರ್ಮಾಣ, ಶಾಲಾ ಕೊಠಡಿಗಳ ನಿರ್ಮಾಣ, ಶೌಚಾಲಯ ನಿರ್ಮಾಣ ಮತ್ತು ದುರಸ್ಥಿ ಮುಂತಾದ ಮೂಲಭೂತ ಸೌಲಭ್ಯಗಳಿಗಾಗಿ ಇಡೀ ರಾಜ್ಯಕ್ಕೆ ಇಲ್ಲಿಯವರೆಗೆ ರೂ.33243.64 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದೆ.
- 2021-22ನೇ ಸಾಲಿನಲ್ಲಿ ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿಮಂಡಳಿ (ಕೆ.ಕೆ.ಆರ್.ಡಿ.ಬಿ)ನಿಧಿಯಿಂದ ಕಲ್ಯಾಣ ಕರ್ನಾಟಕದ 6 ಜಿಲ್ಲೆಗಳಿಗೆ ಕೊಠಡಿಗಳ ದುರಸ್ತಿ, ನೂತನ ಶಾಲಾ ಕಟ್ಟಡಗಳ ನಿರ್ಮಾಣ, ಶಾಲಾ ಕೊಠಡಿಗಳ ನಿರ್ಮಾಣ, ಶೌಚಾಲಯ ನಿರ್ಮಾಣ ಮತ್ತು ದುರಸ್ಥಿ ಹಾಗೂ ಇನ್ನಿತರ ಮೂಲಭೂತ ಸೌಲಭ್ಯಗಳಿಗಾಗಿ ರೂ.15882.56ಲಕ್ಷಗಳ ಅನುದಾನ ಹಂಚಿಕೆ ಮಾಡಲಾಗಿದೆ.
- ಸಮಗ್ರ ಶಿಕ್ಷಣ-ಕರ್ನಾಟಕದಡಿ 2021-22ನೇ ಸಾಲಿನಲ್ಲಿ ಹೆಚ್ಚುವರಿ ಶಾಲಾ ಕೊಠಡಿ, ದುರಸ್ಥಿ, ಹೆಚ್ಚುವರಿ ಶೌಚಾಲಯಗಳು ಸೇರಿದಂತೆ ಮೂಲಭೂತ ಸೌಕರ್ಯ ಒದಗಿಸಲು ಒಟ್ಟು ರೂ.8826.950ಲಕ್ಷಗಳು ಅನುದಾನವನ್ನು ಒದಗಿಸಲಾಗಿದೆ.

ಮುಂದುವರೆದು ಕಳೆದ ಎರಡು ವರ್ಷಗಳಲ್ಲಿ ರಾಜ್ಯವಲಯ ಮುಂದುವರೆದ ಯೋಜನೆಯಡಿ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಕೊಠಡಿಗಳ ನಿರ್ಮಾಣ ಮತ್ತು ದುರಸ್ತಿಗೆ ಬಿಡುಗಡೆಯಾದ ಅನುದಾನದ ವಿವರ ಕೆಳಕಂಡಂತಿದೆ.

**ಕೊಠಡಿ ನಿರ್ಮಾಣ**

| ವರ್ಷ | ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ | ಬಿಡುಗಡೆಯಾದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|---|
| 2019–20 | 632 | 973 | 21982.00 |
| 2020–21 | 1006 | 1483 | 9000.00 |

**ಕೊಠಡಿಗಳ ದುರಸ್ತಿ:–**

| ವರ್ಷ | ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ | ಬಿಡುಗಡೆಯಾದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|---|
| 2019–20 | 1065 | 5003 | 3681.00 |
| 2020–21 | 187 | 187 | 476.11 |

ಆಯವ್ಯಯದಲ್ಲಿ ಒದಗಿಸಲಾದ ಅನುದಾನದ ಲಭ್ಯತೆ ಹಾಗೂ ಅಗತ್ಯತೆಗೆ ಅನುಗುಣವಾಗಿ ರಾಜ್ಯಾದಾದ್ಯಂತ ಹಂತಹಂತವಾಗಿ ಶಾಲಾ ಕೊಠಡಿ/ಶೌಚಾಲಯ ದುರಸ್ಥಿ ಕಾರ್ಯಕೈಗೊಳ್ಳಲು ಕ್ರಮವಹಿಸಲಾಗಿದೆ.

| | | |
|---|---|---|
| ಇ) | ಬೆಳಗಾವಿ ಜಿಲ್ಲೆಯಲ್ಲಿ ಎಷ್ಟು ಶಾಲೆಗಳಲ್ಲಿ ಶೌಚಾಲಯಗಳಿಲ್ಲ: (ತಾಲ್ಲೂಕುವಾರು ವಿವರ ನೀಡುವುದು) | ಬೆಳಗಾವಿ ಜಿಲ್ಲೆಯಲ್ಲಿರುವ ಎಲ್ಲಾ ಶಾಲೆಗಳು ಶೌಚಾಲಯಗಳನ್ನು ಹೊಂದಿವೆ. |
| ಈ) | ಶೌಚಾಲಯಗಳು ಇಲ್ಲದಿರುವ ಶಾಲೆಗಳಲ್ಲಿ ಮತ್ತು ಹೆಚ್ಚಿನ ವಿದ್ಯಾರ್ಥಿನಿಯರು ಇರುವ ಶಾಲೆಯಲ್ಲಿ ಹೆಚ್ಚಿನ ಸಂಖ್ಯೆಯ ಶೌಚಾಲಯಗಳನ್ನು ನಿರ್ಮಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು: ಯಾವ ಕಾಲಮಿತಿಯಲ್ಲಿ ಶೌಚಾಲಯಗಳನ್ನು ನಿರ್ಮಿಸಲಾಗುವುದು: (ವಿವರ ನೀಡುವುದು) | 2020–21ನೇ ಸಾಲಿನಲ್ಲಿ ರಾಜ್ಯ ವಲಯ ಹಾಗೂ ನರೇಗಾ ಅನುದಾನ ಒಗ್ಗೂಡಿಸುವಿಕೆಯ ಮೂಲಕ ಶೌಚಾಲಯ ನಿರ್ಮಾಣ, ಆಟದ ಮೈದಾನ, ಆವರಣ ಗೋಡೆ, ಅಡುಗೆ ಕೋಣೆ, ಮಳೆ ನೀರು ಕೊಯ್ಲು ಯೋಜನೆ, ಪೌಷ್ಠಿಕ ತೋಟ ನಿರ್ಮಾಣ ಯೋಜನೆಗಳನ್ನು ಅನುಷ್ಠಾನಗೊಳಿಸಲು 2920.99ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.<br><br>ಸಮಗ್ರ ಶಿಕ್ಷಣ–ಕರ್ನಾಟಕ ಮೂಲಕ ಹೆಚ್ಚುವರಿ ಶೌಚಾಲಯಗಳಿಗಾಗಿ ರೂ. 1286.00 ಲಕ್ಷಗಳು ಅನುದಾನ ಒದಗಿಸಲಾಗಿದೆ.<br>2021–22ನೇ ಸಾಲಿನಲ್ಲಿ ರಾಜ್ಯ ವಲಯ ಹಾಗೂ ನರೇಗಾ ಅನುದಾನ ಒಗ್ಗೂಡಿಸುವಿಕೆಯ ಮೂಲಕ ಶೌಚಾಲಯ ನಿರ್ಮಾಣ ಹಾಗೂ ದುರಸ್ತಿಗೆ 3500.00ಲಕ್ಷಗಳ ಅನುದಾನ ಒದಗಿಸಲಾಗಿದ್ದು, ಹೆಚ್ಚುವರಿ ಶೌಚಾಲಯಗಳು ನಿರ್ಮಾಣ ಮಾಡಲು ಅಗತ್ಯ ಕ್ರಮವಹಿಸಲಾಗಿದೆ. |

| | | |
|---|---|---|
| ಉ) | ಸರ್ಕಾರಿ ಶಾಲೆಗಳಲ್ಲಿ ಶೌಚಾಲಯಗಳು ಸ್ವಚ್ಛತೆಯಿಲ್ಲದೇ, ಅನಾರೋಗ್ಯಕ್ಕೆ ದಾರಿ ಮಾಡಿಕೊಡುತ್ತಿದ್ದು ಶೌಚಾಲಯಗಳು ಸ್ವಚ್ಛತೆ ಕಾಪಾಡಿಕೊಳ್ಳಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ: (ವಿವರ ನೀಡುವುದು) | ಪ್ರತಿ ವರ್ಷ ಸರ್ಕಾರವು ರಾಜ್ಯ ಮುಂದುವರಿದ ಕಾರ್ಯಕ್ರಮಗಳಡಿಯಲ್ಲಿ ಕುಡಿಯುವ ನೀರು ಶೌಚಾಲಯಗಳ ನಿರ್ವಹಣೆಗಾಗಿ ರಾಜ್ಯದ ಎಲ್ಲಾ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ಮುಖ್ಯೋಪಾಧ್ಯಾಯರ/ಎಸ್.ಡಿ.ಎಂ.ಸಿ ಜಂಟಿ ಖಾತೆಗಳಿಗೆ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.<br><br>2018-19 ರಿಂದ 2020-21ರ ಸಾಲಿನವರೆಗೆ ರಾಜ್ಯ ಮುಂದುವರಿದ ಕಾರ್ಯಕ್ರಮಗಳಡಿಯಲ್ಲಿ ಕುಡಿಯುವ ನೀರು ಶೌಚಾಲಯಗಳ ನಿರ್ವಹಣೆಗಾಗಿ ಪ್ರತಿ ಸರ್ಕಾರಿ ಶಾಲೆಗೆ ಅನುದಾನ ಬಿಡುಗಡೆ ಮಾಡಿರುವ ವಿವರ ಈ ಕೆಳಕಂಡಂತಿದೆ. |

**2018-19**

| ಶಾಲೆಗಳ ವಿವರ | ಘಟಕ ವೆಚ್ಚ (ರೂ.ಗಳಲ್ಲಿ) | ಅನುದಾನ ಬಿಡುಗಡೆ (ರೂ.ಲಕ್ಷಗಳಲ್ಲಿ) |
|---|---|---|
| ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಳು | 3000/- | 636.75 |
| ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳು | 4000/- | 899.48 |
| ಸರ್ಕಾರಿ ಪ್ರೌಢ ಶಾಲೆಗಳು | 4300/- | 201.28 |
| ಒಟ್ಟು | | **1737.51** |

**2019-20**

| ಶಾಲೆಗಳ ವಿವರ | ಘಟಕ ವೆಚ್ಚ (ರೂ.ಗಳಲ್ಲಿ) | ಅನುದಾನ ಬಿಡುಗಡೆ (ರೂ.ಲಕ್ಷಗಳಲ್ಲಿ) |
|---|---|---|
| ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಳು | 4525/- | 950.65 |
| ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳು | 5700/- | 1250.13 |
| ಸರ್ಕಾರಿ ಪ್ರೌಢ ಶಾಲೆಗಳು | 6370/- | 299.20 |
| ಒಟ್ಟು | | **2499.98** |

2020-21

| ಶಾಲೆಗಳ ವಿವರ | ಘಟಕ ವೆಚ್ಚ (ರೂ.ಗಳಲ್ಲಿ) | ಅನುದಾನ ಬಿಡುಗಡೆ (ರೂ.ಲಕ್ಷಗಳಲ್ಲಿ) |
|---|---|---|
| ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಳು | 5400/- | 1122.93 |
| ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳು | 6790/- | 1527.07 |
| ಸರ್ಕಾರಿ ಪ್ರೌಢ ಶಾಲೆಗಳು | 7400/- | 349.80 |
| ಒಟ್ಟು | | **2999.80** |

2021-22

| ಶಾಲೆಗಳ ವಿವರ | ಘಟಕ ವೆಚ್ಚ (ರೂ.ಗಳಲ್ಲಿ) | ಅನುದಾನ ಬಿಡುಗಡೆ (ರೂ.ಲಕ್ಷಗಳಲ್ಲಿ) |
|---|---|---|
| ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಳು | 4650 | 967.00 |
| ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳು | 5400 | 1214.00 |
| ಸರ್ಕಾರಿ ಪ್ರೌಢ ಶಾಲೆಗಳು | 6750 | 319.00 |
| ಒಟ್ಟು | | **2500.00** |

ಮುಂದುವರೆದು ಸಮಗ್ರ ಶಿಕ್ಷಣ ಕರ್ನಾಟಕದ ವತಿಯಿಂದ ಬಿಡುಗಡೆಯಾಗುವ ಶಾಲಾನುದಾನದಲ್ಲಿ ಅನುದಾನದ ಶೇಕಡಾ 10% ರಷ್ಟು ಸ್ವಚ್ಛತೆಗೆ ಮೀಸಲಿಡಲಾಗಿದೆ. ಈ ಅನುದಾನದಲ್ಲಿ ಶೌಚಾಲಯಗಳ ಸ್ವಚ್ಛತೆಯನ್ನು ನಿರ್ವಹಣೆ ಮಾಡಲಾಗುತ್ತಿದೆ.

**ಇಪಿ: 303 ಯೋಸಕ 2021**

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು